# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 346
ಸದಸ್ಯರ ಹೆಸರು : ಶ್ರೀ ಎಸ್.ಎಲ್.ಭೋಜೇಗೌಡ
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 06-03-2020

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ | ಗ್ರಾಮೀಣ ಪ್ರದೇಶದಲ್ಲಿ ಸಂಚರಿಸುತ್ತಿರುವ ಸಾರಿಗೆ ಬಸ್ಸುಗಳು ಹಳೆಯದಾಗಿದ್ದು, ಅಲ್ಲಲ್ಲಿ ಕೆಟ್ಟು ನಿಲ್ಲುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಗ್ರಾಮೀಣ ಪ್ರದೇಶದಲ್ಲಿ ಕವಚ ಮತ್ತು ತಾಂತ್ರಿಕವಾಗಿ ಸುಸ್ಥಿತಿಯಲ್ಲಿರುವ ವಾಹನಗಳನ್ನೇ ಮಾರ್ಗ ಕಾರ್ಯಾಚರಣೆಗೆ ನಿಯೋಜಿಸಲಾಗುತ್ತಿರುತ್ತದೆ.<br><br>ಸದರಿ ಮಾರ್ಗಗಳಲ್ಲಿ ವಾಹನಗಳು ಯಾವುದೇ ತೊಂದರೆಯಿಲ್ಲದೆ ಕಾರ್ಯಾಚರಣೆಯಾಗುತ್ತಿದ್ದು, ಅನಿವಾರ್ಯ ಪರಿಸ್ಥಿತಿಯಲ್ಲಿ ಅವಘಡಗಳು ಸಂಭವಿಸಿದಾಗ, ಅಂತಹ ಸಂದರ್ಭಗಳಲ್ಲಿ ಕೂಡಲೇ ವಾಹನವನ್ನು ದುರಸ್ತಿಪಡಿಸಿ ಕಾರ್ಯಾಚರಣೆ ಮುಂದುವರೆಸಲು ಕ್ರಮ ಕೈಗೊಳ್ಳಲಾಗುತ್ತಿರುತ್ತದೆ. ಇಲ್ಲವಾದಲ್ಲಿ ತುರ್ತಾಗಿ ಬದಲಿ ವಾಹನಗಳ ವ್ಯವಸ್ಥೆಯನ್ನು ಮಾಡಲಾಗುತ್ತಿರುತ್ತದೆ. |
| ಆ | ಹಾಗಿದ್ದಲ್ಲಿ, ಗ್ರಾಮೀಣ ಪ್ರದೇಶದ ರೈತರು/ರೋಗಿಗಳು/ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗ್ರಾಮೀಣ ಪ್ರದೇಶದ ರೈತರು/ ರೋಗಿಗಳು/ವಿದ್ಯಾರ್ಥಿಗಳಿಗೆ ತೊಂದರೆಯಾಗದಂತೆ ಸಾರಿಗೆಗಳನ್ನು ಗ್ರಾಮೀಣ ಪ್ರದೇಶದಲ್ಲಿ ಕಾರ್ಯಾಚರಣೆ ಮಾಡಲಾಗುತ್ತಿದೆ ಹಾಗೂ ಹಂತ ಹಂತವಾಗಿ ಹೊಸ ವಾಹನಗಳನ್ನು ಖರೀದಿಸಿ ಹಳೆಯ ವಾಹನಗಳನ್ನು ನಿಷ್ಕ್ರಿಯೆಗೊಳಿಸಲಾಗುತ್ತಿದೆ. |
| ಇ | ಹಾಗಿದ್ದಲ್ಲಿ, ಇಂತಹ ಬಸ್ಸುಗಳನ್ನು ಬದಲಾಯಿಸಿ ಹೊಸ ಬಸ್ಸುಗಳನ್ನು ಓಡಿಸಲು ಯಾವ ಕ್ರಮ ತೆಗೆದುಕೊಳ್ಳಲಾಗುವುದು? | ಹಳೆಯ, ನಿಗದಿತ ಕಿ.ಮೀ. ಕ್ರಮಿಸಿದ ಮತ್ತು ದೋಷಪೂರಿತ ವಾಹನಗಳನ್ನು ಗುರುತಿಸಿ ಆಗಿಂದಾಗ್ಗೆ ನಿರುಪಯುಕ್ತಗೊಳಿಸಲು ಕ್ರಮ ಕೈಗೊಂಡು ಹೊಸ ವಾಹನಗಳನ್ನು ಸೇರ್ಪಡೆಗೊಳಿಸಲಾಗುತ್ತಿರುತ್ತದೆ.<br><br>ಪ್ರಸ್ತುತ ಗ್ರಾಮೀಣ ಪ್ರದೇಶಗಳಿಗೆ ಸಂಚರಿಸುತ್ತಿರುವ ವಾಹನಗಳು ಸುಸ್ಥಿತಿಯಲ್ಲಿರುತ್ತವೆ. ಅಲ್ಲದೆ, ಸದರಿ ಮಾರ್ಗಗಳಿಗೆ ಹೊಸ ವಾಹನಗಳ ಅವಶ್ಯವಿದ್ದಲ್ಲಿ, ಅಂತಹ ಪ್ರದೇಶಗಳಿಗೆ ಅಗತ್ಯತೆಗನುಗುಣವಾಗಿ ಹೊಸ ವಾಹನಗಳನ್ನು ನಿಯೋಜಿಸಿ ಸುಗಮ ಕಾರ್ಯಾಚರಣೆಗೆ ಕ್ರಮ ಕೈಗೊಳ್ಳಲಾಗುತ್ತದೆ. |

ಸಂಖ್ಯೆ: ಟಿಡಿ 29 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು